

# ಕಲೆ ಮತ್ತು ಪರಿಸರ

ಅಭಿಷೇಕ ಕೃಷ್ಣಗೋಪಾಲ

**ವಿದ್ಯಾರ್ಥಿಗಳಲ್ಲಿ ಆಲೋಚನಾ ಶಕ್ತಿಯನ್ನು ಹೆಚ್ಚಿಸುವ ಹಾಗು ಅನುಭವವನ್ನು ಹೊಮ್ಮಿಸುವ ಕಲೆಯು ಪರಿಸರದ ಪ್ರಾಮುಖ್ಯತೆಯನ್ನು ಕಲಿಸುವ ಶಕ್ತಿಶಾಲಿ ಮಾಧ್ಯಮವಾಗಿದೆ. ಸರಳವಾದ ಕೆಲವು ಕಲಾ ಕೇಂದ್ರಿತ ಚಟುವಟಿಕೆಗಳಿಂದ ಪರಿಸರ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕುರಿತಂತೆ ವಿದ್ಯಾರ್ಥಿಗಳಲ್ಲಿ ಸಂವೇದನೆಯನ್ನು ಹೆಚ್ಚಿಸುವ ಬಗ್ಗೆ ಈ ಲೇಖನದಲ್ಲಿ ವಿಶದಪಡಿಸಲಾಗಿದೆ.**

ಮನುಷ್ಯನಿಂದ ಪರಿಸರದ ಮೇಲಾಗುತ್ತಿರುವ ಹಲವಾರು ಕೆಟ್ಟ ಪರಿಣಾಮಗಳಿಗೆ ಪರಿಸರದೊಂದಿಗಿನ ನಮ್ಮ ಒಡನಾಟವು ಕಡಿಮೆಯಾಗುತ್ತಿರುವುದೇ ಕಾರಣ. ಮಕ್ಕಳು ಪರಿಸರದ ಕುರಿತಾದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಲು ಮತ್ತು ಅದರ ಮಹತ್ವವನ್ನು ಮನಗಾಣಲು ಅನುಭವದಾಯಕ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದರೆ ಸುಸ್ಥಿರ ಜೀವನ ನಡೆಸಲು ಅನುವು ಮಾಡಿಕೊಟ್ಟಂತಾಗುತ್ತದೆ.

ಈ ನಿಟ್ಟಿನಲ್ಲಿ ಕೇಂದ್ರೀಯ ಹಾಗು ರಾಜ್ಯ ಶಿಕ್ಷಣ ಮಂಡಳಿಗಳು ಪರಿಸರ ಶಿಕ್ಷಣವನ್ನು ತಮ್ಮ ಪಠ್ಯಕ್ರಮದಲ್ಲಿ ಕಡ್ಡಾಯಗೊಳಿಸಿವೆ. ಆದರೆ ಬಹಳಷ್ಟು ಕಾರಣಗಳಿಂದಾಗಿ ಈ ಶಿಕ್ಷಣ ಪದ್ಧತಿಯು ಎಳೆಯ ವಿದ್ಯಾರ್ಥಿಗಳ ಮೇಲೆ ಕನಿಷ್ಠ ಪ್ರಭಾವವನ್ನು ಬೀರಿದೆ. ಪರಿಸರ ಶಿಕ್ಷಣದಲ್ಲಿ ಇರುವಂತಹ ವಿಷಯಗಳಾದ ಪರಿಸರ ಮಾಲಿನ್ಯ, ಜಾಗತಿಕ ಹವಾಮಾನ ವೈಪರೀತ್ಯ ಹಾಗು ಓಝೋನ್ ಪದರದ ವಿನಾಶ ಮುಂತಾದ ವಿಷಯಗಳನ್ನು ವಿದ್ಯಾರ್ಥಿಗಳು ತಮಗೆ ಸಂಬಂಧಪಟ್ಟದ್ದೆಂದು ಗ್ರಹಿಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಈಗಾಗಲೇ ತುಂಬಿ ತುಳುಕುತ್ತಿರುವಂತಹ ಪಠ್ಯಗಳ ಜೊತೆಗೆ ಪರಿಸರ ಶಿಕ್ಷಣವನ್ನೂ ಸೇರಿಸಿದರೆ ಇದನ್ನು ಮಿತಿ ಮೀರಿದ ಹೊರೆಯೆಂದು ಶಿಕ್ಷಕರು ಹಾಗು ವಿದ್ಯಾರ್ಥಿಗಳು ಭಾವಿಸುತ್ತಾರೆ. ಪರಿಸರ ಅಧ್ಯಯನವನ್ನು ಇತರೆ ವಿಷಯಗಳಂತೆ ಪರೀಕ್ಷೆಯ ಸಲುವಾಗಿ ಅಧ್ಯಯನ ಮಾಡಬೇಕು ಹಾಗು ನೆನಪಿಟ್ಟುಕೊಳ್ಳಬೇಕೆಂದು ವಿದ್ಯಾರ್ಥಿಗಳು ಭಾವಿಸಿ ಇದನ್ನು ಅಲಕ್ಷಿಸುತ್ತಾರೆ. ಸಹಜವಾಗಿಯೇ, ಪರಿಸರ ಶಿಕ್ಷಣವನ್ನು ಕಲಿಸಲು ಬಳಸುವ ಮಾರ್ಗಗಳು ವಿದ್ಯಾರ್ಥಿಗಳ ಮೇಲೆ ಅತ್ಯಲ್ಪ ಪ್ರಭಾವವನ್ನು ಬೀರಿವೆ. ಇದಕ್ಕೆ ವ್ಯತಿರಿಕ್ತವಾಗಿ ವಿದ್ಯಾರ್ಥಿಗಳು ಪರಿಸರಕ್ಕೆ ಸಂಬಂಧಪಟ್ಟಂತಹ ವೈಜ್ಞಾನಿಕ ಸತ್ಯಗಳನ್ನಷ್ಟೇ ಕಲಿಯುವುದಲ್ಲದೇ ಪರಿಸರದ ಬಗ್ಗೆ ಸಂವೇದನೆಯನ್ನೂ ಹೆಚ್ಚಿಸಿಕೊಳ್ಳಬೇಕಾಗಿದೆ ಹಾಗು ತಮ್ಮ ಸುತ್ತ ಮುತ್ತಲಿನ ನಿಸರ್ಗವನ್ನು ಕಾಡುತ್ತಿರುವ ವಿಷಯಗಳನ್ನೂ ಅರಿಯಬೇಕಾಗಿದೆ. ಹೀಗಾಗಲು, ಪರಿಸರದ ಕಡೆಗಿನ ಮಕ್ಕಳ ಸಂವೇದನಾಶೀಲತೆಯನ್ನು ಜಾಗೃತಗೊಳಿಸುವಂತಹ ಮತ್ತು ಪೋಷಿಸುವಂತಹ ನವೀನ ಮಾದರಿಯ ಪ್ರಯೋಗಗಳನ್ನು ಹಾಗು ಮಾರ್ಗಗಳನ್ನು ನಾವು ಕಂಡುಕೊಳ್ಳಬೇಕಾಗಿದೆ.

> ...ಮಕ್ಕಳು ಪರಿಸರದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಲು ಮತ್ತು ಅದರ ಮಹತ್ವವನ್ನು ಮನಗಾಣಲು ಅನುಭವದಾಯಕ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದರೆ ಸುಸ್ಥಿರ ಜೀವನ ನಡೆಸಲು ಅನುವು ಮಾಡಿಕೊಟ್ಟಂತಾಗುತ್ತದೆ.

ಮನುಕುಲದ ಇತಿಹಾಸವನ್ನು ಗಮನಿಸಿದರೆ ಕಲೆ ಮತ್ತು ಶಿಕ್ಷಣವು ಒಂದಕ್ಕೊಂದು ಬೆಸೆದುಕೊಂಡಿರುವುದು ಕಂಡು ಬರುತ್ತದೆ. ನೈಜವಾಗಿ, ಜ್ಞಾನವು ಕಲೆಯ ಮೂಲಕ ಹರಡುವುದೆಂದು ಒಂದರ್ಥದಲ್ಲಿ ಹೇಳಬಹುದು. ಹೀಗಿದ್ದರೂ ಈಗಿನ ಸನ್ನಿವೇಶದಲ್ಲಿ ಜಗತ್ತಿನ ಹಲವಾರು ಶಿಕ್ಷಣ ಪದ್ಧತಿಗಳಲ್ಲಿ ಇವೆರಡೂ ಒಂದಕ್ಕೊಂದು ಸಂಬಂಧವಿಲ್ಲದಂತಾಗಿವೆ. ಕಲೆಯನ್ನು ಒಂದು ಸಾಧನವಾಗಿ

ಬೋಧನೆಯಲ್ಲಿ ತೊಡಗಿಸಿಕೊಂಡರೆ ಅದು ವಿದ್ಯಾರ್ಥಿಗಳನ್ನು ಆಲೋಚಿಸಲು, ಅನುಭವಿಸಲು ಪ್ರಚೋದಿಸುವುದಲ್ಲದೇ ಅವರಲ್ಲಿ ಸೂಕ್ಷ್ಮತೆಯನ್ನು ಬೆಳೆಸುತ್ತದೆ. ಹಲವಾರು ಕಲಾಧಾರಿತ ಚಟುವಟಿಕೆಗಳೊಂದಿಗೆ ಪರಿಸರದೊಡನೆ ನಾವು ಒಡನಾಡಿದರೆ ಪರಿಸರದ ಕಡೆಗಿನ ಈ ಸೂಕ್ಷ್ಮತೆಯನ್ನು ಸಾಧಿಸಲು ಸಾಧ್ಯ. ನಿಜವಾಗಿ ನೋಡುವುದಾದರೆ, ಸ್ವಾಭಾವಿಕ ಪರಿಸರವನ್ನು ಅಭ್ಯಸಿಸಲು ಸಾಂಪ್ರದಾಯಿಕ ಶಿಕ್ಷಣಕ್ಕಿಲ್ಲದ ಸಾಮರ್ಥ್ಯವು ಕಲಾ ಮಾಧ್ಯಮಕ್ಕಿದೆ.

ಕಲೆಯನ್ನು ಉಪಯೋಗಿಸಿಕೊಂಡು ವಿದ್ಯಾರ್ಥಿಗಳಿಗೆ ಪರಿಸರವನ್ನು ಬೋಧಿಸಲು ಒಬ್ಬಾತ ತರಬೇತಿ ಪಡೆದ ಕಲಾಕಾರನಾಗಿರಬೇಕಾಗಿಲ್ಲ ಅಥವಾ ವಿಷಯ ತಜ್ಞನೂ ಆಗಬೇಕಾಗಿಲ್ಲ. ಕಲೆಯೆಂಬ ಮಾಧ್ಯಮದ ಮೂಲಕ ಕುತೂಹಲಶಾಲಿ, ವಿಚಾರಶೀಲ ಹಾಗು ಸೃಜನಾತ್ಮಕ ಚಿಂತನೆಯುಳ್ಳವರು ನವೀನ ಕಲಾಧಾರಿತ ಚಟುವಟಿಕೆಗಳನ್ನು ಪ್ರಯೋಗಿಸಬಹುದು. ಸರಳವಾದ ಕೆಲವು ಕಲಾಧಾರಿತ ಚಟುವಟಿಕೆಗಳ ಮೂಲಕ ಶಾಲಾ ಶಿಕ್ಷಕರು ಪರಿಸರ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಸುಲಭವಾಗಿ ಬೋಧಿಸಬಹುದು. ಈ ಚಟುವಟಿಕೆಗಳು ಅತ್ಯಂತ ಜಟಿಲ ಅಥವಾ ತುಂಬಾ ಸೃಜನಾತ್ಮಕವಾಗಿ ಇರಬೇಕೆಂದೇನೂ ಇಲ್ಲ. ಕೆಲ ಸರಳವಾದ ಪ್ರಯೋಗಗಳೂ ಕೂಡ ಮಕ್ಕಳ ಕಲಿಕಾ ಸಾಮರ್ಥ್ಯದಲ್ಲಿ ಮಹತ್ತರ ಬದಲಾವಣೆಯನ್ನು ತರಬಲ್ಲವು. ಪರಿಸರದ ಕುರಿತಾಗಿನ ಮಕ್ಕಳ ಸೂಕ್ಷ್ಮತೆಯನ್ನು ಉದ್ದೀಪಿಸಲು ಬಳಸುವಂತಹ ಕೆಲ ಸರಳ ಚಟುವಟಿಕೆ ಹಾಗು ಪ್ರಯೋಗಗಳನ್ನು ಈ ಲೇಖನದ ಮೂಲಕ ಕಂಡುಕೊಳ್ಳೋಣ.

## ಕಲೆಯ ಮೂಲಕ ಅವಲೋಕನೆಯು ಆತ್ಮಸ್ಥೈರ್ಯವನ್ನು ಬೆಳೆಸುತ್ತದೆ!

ಹುಲಿಗಳ ರಕ್ಷಿತಾರಣ್ಯದ ಪ್ರದೇಶದಲ್ಲಿ ವಾಸಿಸುತ್ತಿರುವ ಮಕ್ಕಳಿಗೆ ನೈಸರ್ಗಿಕ ಪ್ರಪಂಚವನ್ನು ಕಲೆಯ ಮೂಲಕ ಪರಿಚಯಿಸಲು ಒಂದು ಪ್ರಯೋಗವನ್ನು ನಡೆಸಲಾಯಿತು. ಕಲಾಧಾರಿತ ಚಟುವಟಿಕೆಗಳನ್ನು ಹಮ್ಮಿಕೊಳ್ಳುವ ಮುನ್ನ ಮಕ್ಕಳಿಗೆ ಸ್ಥಳೀಯ ಜೀವ ವೈವಿಧ್ಯತೆಯ ಕುರಿತಾದ ಸರಾಸರಿ ಜ್ಞಾನ ಎಷ್ಟಿದೆ ಎಂದು ತಿಳಿಯುವುದಕ್ಕೋಸ್ಕರ ಪ್ರಶ್ನಾವಳಿಗಳನ್ನು ಒಳಗೊಂಡ ಒಂದು ಸಮೀಕ್ಷೆಯನ್ನು ನಡೆಸಲಾಯಿತು. ಅಚ್ಚರಿಯೆನ್ನುವಂತೆ, ತಮ್ಮ

ಕಲೆಯನ್ನು ಉಪಯೋಗಿಸಿಕೊಂಡು ವಿದ್ಯಾರ್ಥಿಗಳಿಗೆ ಪರಿಸರವನ್ನು ಬೋಧಿಸಲು ಒಬ್ಬಾತ ತರಬೇತಿ ಪಡೆದ ಕಲಾಕಾರನಾಗಿರಬೇಕಾಗಿಲ್ಲ ಅಥವಾ ವಿಷಯ ತಜ್ಞನೂ ಆಗಬೇಕಾಗಿಲ್ಲ. ಕಲೆಯೆಂಬ ಮಾಧ್ಯಮದ ಮೂಲಕ ಕುತೂಹಲಶಾಲಿ, ವಿಚಾರಶೀಲ ಹಾಗು ಸೃಜನಾತ್ಮಕ ಚಿಂತನೆಯುಳ್ಳವರು ನವೀನ ಕಲಾಧಾರಿತ ಚಟುವಟಿಕೆಗಳನ್ನು ಪ್ರಯೋಗಿಸಬಹುದು.



**ಚಿತ್ರ 1. ತಮಗೆ ಅಪರಿಚಿತವಾದ ಪ್ರಾಣಿಗಳ ಸೂಕ್ಷ್ಮ ವಿವರಗಳನ್ನು ನೆನಪಿಟ್ಟುಕೊಳ್ಳಲು ಮಕ್ಕಳಿಗೆ ಚಿತ್ರಕಲೆಯು ಸಹಾಯ ಮಾಡಿತು.**



ಸುತ್ತಲಿನ ವನ್ಯ ಸಂಕುಲದ ವೈವಿಧ್ಯತೆಯ ಬಗ್ಗೆ ಸ್ಥಳೀಯ ಮಕ್ಕಳ ಅಜ್ಞಾನವನ್ನು ಈ ಸಮೀಕ್ಷೆಯು ಪ್ರಚುರ ಪಡಿಸಿತು. ಮಕ್ಕಳನ್ನು ಅರಣ್ಯಕ್ಕೆ ಕರೆದುಕೊಂಡು ಹೋಗಿ ಅಲ್ಲಿನ ವನ್ಯಜೀವಿಗಳ ಬಗ್ಗೆ ಕೆಲವೊಂದಿಷ್ಟು ಅಧಿಕೃತ ಮಾಹಿತಿಯನ್ನು ಕೊಡುವುದು ಆದರ್ಶವೆನಿಸಿದರೂ ಅದಕ್ಕೆ ಅಪ್ಪಣೆ ಸಿಗುವುದು ಕಷ್ಟಸಾಧ್ಯವಾಗಿತ್ತು. ಬದಲಾಗಿ, ತರಗತಿಯ ಅವಧಿಯಲ್ಲಿ ಕೆಲವೊಂದಿಷ್ಟು ಕಲಾ ಮಾದರಿಗಳ ಮುಖಾಂತರ ವನ್ಯಜೀವಿಗಳನ್ನು ಗುರುತಿಸುವುದನ್ನು ಕಲಿಸುವ ಪ್ರಯತ್ನ ಮಾಡಲಾಯಿತು. ಹುಲಿಗಳ ರಕ್ಷಿತಾರಣ್ಯ ಪ್ರದೇಶದಲ್ಲಿರುವ ಕೆಲವೊಂದು ಅತ್ಯಮೂಲ್ಯ ಸಸ್ತನಿಗಳ ಛಾಯಾಚಿತ್ರಗಳನ್ನು ವಿದ್ಯಾರ್ಥಿಗಳಿಗೆ ತೋರಿಸಲಾಯಿತು ಹಾಗು ಒಂದೇ ಕುಟುಂಬಕ್ಕೆ ಸೇರಿದ ಬೇರೆ ಬೇರೆ ಪ್ರಭೇದಗಳನ್ನು ವರ್ಗೀಕರಿಸಲು ತಿಳಿಸಲಾಯಿತು. ವಿದ್ಯಾರ್ಥಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿ ಒಂದು ಗುಂಪಿಗೆ ಕೇವಲ ಛಾಯಾಚಿತ್ರಗಳನ್ನು ಅವಲೋಕಿಸಲು ಹೇಳಿದರೆ, ಮತ್ತೊಂದು ಗುಂಪಿಗೆ ಆ ಚಿತ್ರಗಳ ಮೂಲ ವ್ಯತ್ಯಾಸಗಳ ಕರಡು ಪ್ರತಿಯನ್ನು ಚಿತ್ರಿಸಲು ತಿಳಿಸಲಾಯಿತು. ಆ ಕಾಡಿನಲ್ಲಿ ಐದು ಪ್ರಭೇದದ ಪ್ರೈಮೇಟುಗಳು, ಎರಡು ಬಗೆಯ ಬೆಕ್ಕಿನ ಪ್ರಭೇದಗಳು ಮತ್ತು ಮೂರು ಗೊರಸುಳ್ಳ ಪ್ರಾಣಿಗಳ ಪ್ರಭೇದಗಳಿದ್ದುದರಿಂದ ವಿದ್ಯಾರ್ಥಿಗಳು ಅವುಗಳನ್ನು ಗುರುತಿಸಲು ಅವುಗಳ ನಡುವಿನ ವ್ಯತ್ಯಾಸವನ್ನು ಸ್ಪಷ್ಟವಾಗಿ ಅರಿತು ನೆನಪಿಟ್ಟುಕೊಳ್ಳುವುದು ಅವಶ್ಯಕವಾಗಿತ್ತು. ಸಸ್ತನಿಗಳನ್ನು ಕರಡು ರೂಪದಲ್ಲಿ ಚಿತ್ರಿಸಿದ ಮಕ್ಕಳು ಪಡೆದ ಜ್ಞಾನವು ಕೇವಲ ಛಾಯಾಚಿತ್ರಗಳನ್ನು ಅವಲೋಕಿಸಿದ ಮಕ್ಕಳ ಬುದ್ಧಿಮತ್ತೆಗಿಂತ ಚೆನ್ನಾಗಿದೆ ಎಂದು ಈ ಕಾರ್ಯಾಗಾರದಿಂದ ತಿಳಿದುಬಂದಿತು. ತಾವು ಅಲ್ಲಿಯವರೆಗೂ ನೋಡಿರದಿದ್ದ ಪ್ರಾಣಿಗಳ ಹಲವಾರು ಸೂಕ್ಷ್ಮ ವಿಚಾರಗಳನ್ನು ನೆನಪಿಟ್ಟುಕೊಳ್ಳಲು ಮಕ್ಕಳಿಗೆ ಚಿತ್ರಕಲೆಯು ಸಹಾಯಮಾಡಿತು. ಚಿತ್ರಗಳನ್ನು ಬಿಡಿಸಿದ ಹೆಣ್ಣು ಮಕ್ಕಳಲ್ಲಿಯೂ ಈ ಜ್ಞಾನವು ಗಮನಾರ್ಹವಾಗಿ ಹೆಚ್ಚಿತ್ತು. ಹಲವಾರು ಹಳ್ಳಿಗಳಲ್ಲಿ ಪ್ರಾಯಕ್ಕೆ ಬಂದ ಹೆಣ್ಣು ಮಕ್ಕಳನ್ನು ನಾಲ್ಕು ಗೋಡೆಗಳ ನಡುವೆಯೇ ಬಂಧಿಸಿಡಲಾಗುತ್ತದೆ. ಕಲಾ ಮಾಧ್ಯಮವು ಇವರನ್ನೂ ಒಳಗೊಂಡಂತೆ, ಇತರೆ ಮಕ್ಕಳಿಗೂ ಬಾಹ್ಯ ಪ್ರಪಂಚವನ್ನು ಅರಿಯಲು ಒಂದು ಉಪಯುಕ್ತ ಸಾಧನವಾಗಿದೆ.

ಇದೇ ರೀತಿ, ಬೇರೆ ಬೇರೆ ಜಾತಿಯ ಗಿಡ ಮರಗಳ ಗುಣ ಲಕ್ಷಣಗಳನ್ನು ಗಮನಿಸುವ ಹಾಗು ಚಿತ್ರಿಸುವ ಪರೀಕ್ಷೆಯನ್ನು ವಿದ್ಯಾರ್ಥಿಗಳಿಗೆ ನಡೆಸಲಾಯಿತು. ಪ್ರತೀ ತರಗತಿಯನ್ನು ಎರಡು ಗುಂಪುಗಳನ್ನಾಗಿ ವಿಂಗಡಿಸಿ, ಒಂದು ಗುಂಪಿಗೆ ಶಾಲಾ ಆವರಣದಲ್ಲಿ ಬೆಳೆದ ಬೇರೆ ಬೇರೆ ಮರಗಳನ್ನು ಅವಲೋಕಿಸಲು ತಿಳಿಸಿದರೆ, ಮತ್ತೊಂದು ಗುಂಪಿಗೆ ತಾವು ಅವಲೋಕಿಸಿದ ಮರಗಳ ಭಾಗಗಳಾದ ಎಲೆ, ಕಾಯಿ, ಹೂಗಳನ್ನು ಚಿತ್ರಿಸಲು ತಿಳಿಸಲಾಯಿತು. ತೊಗಟೆಯ ಮೇಲ್ಮೈ ಲಕ್ಷಣಗಳನ್ನು ಅಭ್ಯಸಿಸಲು ಮಕ್ಕಳಿಗೆ ಕ್ರೇಯಾನುಗಳನ್ನು ಬಳಸಿಕೊಂಡು ಅವುಗಳ ಅಚ್ಚು ತೆಗೆಯಲೂ ಪ್ರೋತ್ಸಾಹಿಸಲಾಯಿತು. ಈ ಚಟುವಟಿಕೆಯ ನಂತರ ದತ್ತಾಂಶವನ್ನು ಸಂಗ್ರಹಿಸಿ, ತಾಳೆ ನೋಡಿದಾಗ ತಿಳಿದು ಬಂದ ಅಂಶವೇನೆಂದರೆ, ತಾವು ಅವಲೋಕಿಸಿದ ಮರಗಳನ್ನು ಚಿತ್ರಿಸಿದ ಗುಂಪಿನವರು, ಎಲೆ ಹಾಗು ತೊಗಟೆಯ ಆಕಾರಗಳ ನಡುವಿನ ವ್ಯತ್ಯಾಸವನ್ನು ಹೆಚ್ಚು ನಿಖರವಾಗಿ ಮತ್ತು ದೀರ್ಘ ಕಾಲದವರೆಗೂ ನೆನಪಿಟ್ಟುಕೊಳ್ಳಲು ಸಾಧ್ಯವಾಯಿತು. ಅಂತಹವರು ಯಾವುದೇ ಆಕರಗಳ ಸಹಾಯವಿಲ್ಲದೇ ಮರದ ಕಾಯಿ ಅಥವಾ ಎಲೆಗಳ ಚಿತ್ರಗಳನ್ನು





**ಚಿತ್ರ 2. ಹೊರಾಂಗಣ ಚಿತ್ರಕಲೆಯಲ್ಲಿರುವ ರೋಮಾಂಚನ.**
Credits: Abhisheka K. License: CC-BY-NC.

ಕರಿ ಹಲಗೆಯ ಮೇಲೆ ಬಿಡಿಸಲು ಸಾಧ್ಯವಾಯಿತು. ಈ ಚಟುವಟಿಕೆಯಿಂದ ತಿಳಿದು ಬಂದ ಇನ್ನೊಂದು ಗಮನಾರ್ಹ ವಿಷಯವೇನೆಂದರೆ, ಬೇರೆ ಬೇರೆ ನಮೂನೆಯ ಮರಗಳನ್ನು ಅವಲೋಕಿಸಲು ಸೂಚಿಸಿದ ಗುಂಪಿನ ಮಕ್ಕಳು ತಮಗೆ ಈಗಾಗಲೇ ಪರಿಚಯವಿರುವಂತಹ ಹುಣಸೆ, ಪಪ್ಪಾಯಿ ಅಥವಾ ಅಂಜೂರದಂತಹ ಸಾಮಾನ್ಯ ಮರಗಳನ್ನಷ್ಟೇ ಆಯ್ಕೆ ಮಾಡಿಕೊಂಡರು. ತಾವು ಅವಲೋಕಿಸಿದಂತಹ ಮರಗಳ ಹೆಸರುಗಳನ್ನು ನೆನಪಿಟ್ಟುಕೊಳ್ಳಲಾರೆವೆಂಬ ಹಿಂಜರಿಕೆಯಿಂದಾಗಿ ಈ ಮಕ್ಕಳು ತಮಗೆ ಚಿರಪರಿಚಿತವಿರುವ ಮರಗಳನ್ನೇ ಆರಿಸಿಕೊಂಡರು. ಇದಕ್ಕೆ ವ್ಯತಿರಿಕ್ತವಾಗಿ ಚಿತ್ರಿಸಲು ಉದ್ಯುಕ್ತರಾದ ವಿದ್ಯಾರ್ಥಿಗಳು ತಮಗೆ ಅಪರಿಚಿತವಾದ ಮರಗಳನ್ನೇ ಬಿಡಿಸಲು ಮುಂದಾದರು. ಈ ರೀತಿ ಕಲೆಯು ವಿದ್ಯಾರ್ಥಿಗಳ ಆತ್ಮವಿಶ್ವಾಸವನ್ನು ಹೆಚ್ಚಿಸಿದ್ದಲ್ಲದೇ, ವಿವಿಧ ಗುಣ–ಲಕ್ಷಣಗಳುಳ್ಳ ಮರಗಳನ್ನು ಗುರುತಿಸುವಲ್ಲಿ ಹಾಗು ಅವರ ಬುದ್ಧಿಮತ್ತೆಯನ್ನು ಹೆಚ್ಚಿಸಲು ಸಹಾಯ ಮಾಡಿದೆ.

ಇದೇ ರೀತಿ, ಚಿತ್ರಕಲೆಯನ್ನು ಪಕ್ಷಿ, ಕೀಟ ಮತ್ತಿತರೆ ಜೀವಿಗಳನ್ನು ಗುರುತಿಸುವ ಕಲಿಕೆಯನ್ನು ಹೆಚ್ಚಿಸಲು ಬಳಸಬಹುದಾಗಿದೆ. ಪರಿಸರ ವೀಕ್ಷಣೆಯು ವಿದ್ಯಾರ್ಥಿಗಳಿಗೆ ತಾವು ಈವರೆಗೆ ಅಲಕ್ಷಿಸಿದ ಜೀವಸಂಕುಲವನ್ನು ಹತ್ತಿರದಿಂದ ವೀಕ್ಷಿಸುವಲ್ಲಿ ಸಹಾಯ ಮಾಡಿದರೂ, ಕಲೆಯು ಮಕ್ಕಳ ಕೂಲಂಕಷ ಪರಿಶೀಲನಾ ಸಾಮರ್ಥ್ಯ ಹಾಗು ಗ್ರಹಣ ಶಕ್ತಿಯನ್ನು ಹೆಚ್ಚಿಸುತ್ತದೆ. ಉದಾಹರಣೆಗೆ, ಹಳ್ಳಿ ಮಕ್ಕಳ ಒಂದು ಗುಂಪಿಗೆ ಪ್ರಾಣಿಗಳ ವಾಸಸ್ಥಾನವನ್ನು ಹುಡುಕಿ, ಅದರ ಚಿತ್ರವನ್ನು ಬಿಡಿಸಲು ತಿಳಿಸಲಾಯಿತು. ಅವರು, ಹೆಚ್ಚಿನ ಸಮಯವನ್ನು ಅಲ್ಲಿ ಇದ್ದಿರಬಹುದಾದ ಪ್ರಾಣಿಗಳ ವೀಕ್ಷಣೆಗೆ ಮತ್ತು ಅವು ನಿರ್ಮಿಸಿದ ವಾಸಸ್ಥಾನಗಳ ವಿವರಗಳಿಗಾಗಿ ಮೀಸಲಿಟ್ಟರು. ಪರಿಸರ ವೀಕ್ಷಣೆಯ ಸಂದರ್ಭದಲ್ಲಿ ಕೆಲವೊಂದು ವಿಷಯಗಳು ಬಿಟ್ಟು ಹೋಗಬಹುದೇನೋ ಎಂದು ಅವುಗಳನ್ನು ಚಿತ್ರಿಸಲು ಮಕ್ಕಳು ಆ ಮನೆಗಳ ಸೂಕ್ಷ್ಮ ವಿವರಗಳ ಕಡೆಗೆ ಒತ್ತನ್ನು ನೀಡಿದರು ಹಾಗೂ ಅವನ್ನು ಕೂಲಂಕಷವಾಗಿ ಪರೀಕ್ಷಿಸಿದರು.

ಈ ಚಟುವಟಿಕೆಯನ್ನು ಶಾಲಾ ಆವರಣದಲ್ಲೂ ನಡೆಸಬಹುದು. ಶಿಕ್ಷಕರು ಪ್ರಾಣಿಗಳ ವಾಸಸ್ಥಾನಗಳನ್ನು ಗುರುತಿಸಲು ಹೇಳಬಹುದು. ಉದಾಹರಣೆಗೆ, ಹೆಚ್ಚಿನ ಮಕ್ಕಳು ತೊಡಗಿಸಿಕೊಳ್ಳುವ ಹಕ್ಕಿಗೂಡಿನ ಅವಲೋಕನವಷ್ಟೇ ಅಲ್ಲದೇ, ವಿದ್ಯಾರ್ಥಿಗಳ ಗಮನವನ್ನು ಜೇಡರ ಬಲೆ ಅಥವಾ ಕಣಜದ ಗೂಡು ಹೇಗಿವೆ ಎಂಬುದರ ಕಡೆಗೆ ಸೆಳೆಯುವಂತಹ ಚಟುವಟಿಕೆಗಳನ್ನೂ ಮಾಡಬಹುದು. ಶಿಕ್ಷಕರು ಮಕ್ಕಳಿಗೆ ತಾವು ನೂತನವಾಗಿ ಗುರುತಿಸಿದ ಪ್ರಾಣಿಗಳ ವಾಸಸ್ಥಾನವನ್ನು ಗಮನಿಸಲು ಹಾಗೂ ಚಿತ್ರ ಬಿಡಿಸಲು ಸಾಕಷ್ಟು ಸಮಯಾಕಾಶವನ್ನೂ



**ಚಿತ್ರ 3. ಹುಲ್ಲನಡಿಯಲ್ಲಿ ಅಡಗಿದ ಇರುವೆ ಗೂಡನ್ನು ಚಿತ್ರಿಸುತ್ತಿರುವುದು.**
Credits: Abhisheka K. License: CC-BY-NC.

ಕೊಡಬೇಕಾಗಬಹುದು. ಈ ರೀತಿ ಬರೆದಂತಹ ಚಿತ್ರಗಳನ್ನು ತರಗತಿಯ ಕೊನೆಯಲ್ಲಿ ಪ್ರದರ್ಶಿಸಬೇಕು ಮತ್ತು ಅದರ ಬಗ್ಗೆ ಚರ್ಚಿಸಿದಲ್ಲಿ ಇಡೀ ತರಗತಿಯೇ ಪ್ರಾಣಿಗಳ ವಾಸಸ್ಥಾನ ಮತ್ತು ಅದನ್ನು ಕಟ್ಟುವ ಕಲೆಯ ಬಗ್ಗೆ ತಿಳಿದಂತಾಗುತ್ತದೆ. ಪ್ರಾಣಿಗಳ ಅನನ್ಯ ವಿಚಾರಗಳು, ವಾಸಸ್ಥಾನವನ್ನು ನಿರ್ಮಿಸುವುದಕ್ಕೆ ಬೇಕಾದ ಆವಶ್ಯಕತೆಗಳು ಹಾಗೂ ಯಾವ ವಿಧದ ಭೀತಿಗಳಿಂದ ಪ್ರಾಣಿಗಳನ್ನು ರಕ್ಷಿಸಲು ಅವು ಅವಶ್ಯಕವಾಗಿವೆ ಎಂಬುದನ್ನು ಮನದಟ್ಟಾಗುವಂತೆ ಮಾಡಲೂ ಈ ರೀತಿಯ ಗುಂಪು ಚರ್ಚೆಗಳನ್ನು ಬಳಸಿಕೊಳ್ಳಬಹುದು.

## ಪರಿಸರ ಪ್ರೇರಿತ ಕಲೆಗೆ ಪ್ರೋತ್ಸಾಹ

ಪರಿಸರ ತಜ್ಞನಾಗಿ ನನ್ನ ಅನುಭವದ ಆಧಾರದ ಮೇಲೆ ಹೇಳುವುದಾದರೆ ವಿದ್ಯಾರ್ಥಿಗಳು ಇಂತಹ ಚಿತ್ರಕಲೆಯಲ್ಲಿ ತೊಡಗಿಸಿಕೊಳ್ಳುವುದಕ್ಕೆ ಹಿಂಜರಿದು ದೂರ ಸರಿಯುವ ಹಲವಾರು ಸಂದರ್ಭಗಳನ್ನು ನಾನು ಗಮನಿಸಿದ್ದೇನೆ. ಚಂದ ಕಾಣುವ ಚಿತ್ರವನ್ನು ಬಿಡಿಸಲು ಶಿಕ್ಷಕರು ಹಾಗು ಪಾಲಕರು ಒತ್ತಡ ಹೇರುತ್ತಾರೆ. ನಂತರ ಬಿಡಿಸಿದ ಚಿತ್ರವನ್ನು ಮೂಲ ಆಕೃತಿಗೆ ಹೋಲಿಸಿ ನೋಡಿ ಚಿತ್ರದ ಗುಣಮಟ್ಟವನ್ನು ನಿರ್ಧರಿಸುತ್ತಾರೆ. ಇದೇ ರೀತಿಯ ಇನ್ನಿತರೆ ಕಾರಣಗಳಿಂದಾಗಿ ಸೃಜನಶೀಲತೆಗೆ ಆಸ್ಪದವಿಲ್ಲದಿರುವುದರಿಂದ ವಿದ್ಯಾರ್ಥಿಗಳು ಚಿತ್ರಕಲೆಯಿಂದ ಹಿಂದೆ ಸರಿಯುತ್ತಾರೆ. ಮಕ್ಕಳನ್ನು ಪ್ರಕೃತಿಯಲ್ಲಿ ಅವರ ಪಾಡಿಗೆ ಬಿಟ್ಟು, ತಮಗೆ ಇಷ್ಟ ಬಂದವುಗಳನ್ನು ನೋಡುತ್ತಾ, ತಮಗಿಷ್ಟವಾದ ರೀತಿಯಲ್ಲಿ ಅವುಗಳನ್ನು ಚಿತ್ರಿಸಲು ಹೇಳಿದಾಗ ಮೂಡುವ ಪರಿಸರ ಪ್ರೇರಿತ ಚಿತ್ರಕಲೆಯು ಮಕ್ಕಳು ಮಾನಸಿಕ ಕಟ್ಟುಪಾಡುಗಳಿಂದ ಹೊರಬರಲು ಸಹಾಯ ಮಾಡುತ್ತದೆ. ಇಲ್ಲಿ ಮಕ್ಕಳು ಚಿತ್ರಕಲೆಯಲ್ಲಿ ತಮ್ಮನ್ನು

ತೊಡಗಿಸಿಕೊಳ್ಳುವ ಮೂಲಕ ಪಡೆದ ಅನುಭವವು ಮುಖ್ಯವಾಗುತ್ತದೆಯೇ ಹೊರತು ಕಲೆಯು ಹೇಗೆ ಮೂಡಿ ಬಂದಿದೆ ಎನ್ನುವುದಲ್ಲ.

ಶಾಲೆಯಲ್ಲಿ ಚಿತ್ರಕಲೆಗೆ ಆಸ್ಪದವಿಲ್ಲದಂತಹ ಮಕ್ಕಳು ಚಿತ್ರ ಬರೆಯುವುದಕ್ಕೆ ಹಾಗು ಪೇಂಟಿಂಗ್‌ಗಳನ್ನು ಮಾಡುವುದಕ್ಕೆ ಅಂಜುತ್ತಾರೆ. ಇಂತಹ ಸಂದರ್ಭಗಳಲ್ಲಿ ನಿಗದಿತ ಕಾಲಮಿತಿಯೊಳಗೆ ನಾನು ಪ್ರಕೃತಿದತ್ತ ಸಾಮಗ್ರಿಗಳನ್ನು ಬಳಸಿಕೊಂಡು ಕಲಾಕೃತಿಗಳನ್ನು ರಚಿಸಲು ಮುಂದಾದೆ. ಹೀಗೆ ಮಾಡಿದರೆ, ಮಕ್ಕಳು ಪೆನ್ಸಿಲ್, ಬಣ್ಣಗಳು ಹಾಗು ಪೇಪರ್‌ಗಳನ್ನಷ್ಟೇ ಅವಲಂಬಿಸದೇ ಪ್ರಾಕೃತಿಕ ಬಣ್ಣ ಹಾಗು ಸಾಮಗ್ರಿಗಳನ್ನು ಬಳಸಲು ಕಲಿಯುತ್ತಾರೆ. ಮಕ್ಕಳಿಗೆ ಪ್ರಕೃತಿಯಲ್ಲಿ ಲಭ್ಯವಾಗುವ ಸಾಮಗ್ರಿಗಳನ್ನು ಆಯ್ದುಕೊಂಡು ಕಲಾಕೃತಿಯನ್ನು ರಚಿಸಲು ಹೇಳಿದಾಗ ಅವರ ಮುಂದೆ ಮಣ್ಣು ಮತ್ತು



**ಚಿತ್ರ 5. ಕಾಲಿಮ್‌ಪೊಂಗ್‌ನ ರೆಲ್ಲಿ ಹಳ್ಳಿಯಲ್ಲಿ ವಿದ್ಯಾರ್ಥಿಗಳು ರಚಿಸಿದ ಹಕ್ಕಿಯ ಗೂಡುಗಳು.**
Credits: Abhisheka K. License: CC-BY-NC.

ಕಲ್ಲು, ಎಲೆ, ಬೀಜ, ಹಣ್ಣುಗಳು, ಮುರಿದ ಮರದ ತುಂಡುಗಳು, ಒಣ ಹುಲ್ಲು, ಸತ್ತ ಕೀಟಗಳು ಸೇರಿದಂತೆ ಸಾಕಷ್ಟು ಆಯ್ಕೆಗಳಿದ್ದವು! ಇಷ್ಟು ಸಮಯ ಗಣನೆಗೇ ತೆಗೆದುಕೊಳ್ಳದಿದ್ದ ಸಾಕಷ್ಟು ಸಾಮಗ್ರಿಗಳು ಒಮ್ಮೆಲೇ ಅವರೆದುರು ತೆರೆದುಕೊಳ್ಳುತ್ತವೆ. ಜೊತೆಗೆ, ಈ ಸಾಮಗ್ರಿಗಳನ್ನು ಕೈಯಿಂದ ಮುಟ್ಟಿ, ಅನುಭವಿಸುವ ಅವಕಾಶ ಅವರಿಗೆ ದೊರೆಯುತ್ತದೆ. ಯಾವುದೇ ನಿರ್ದಿಷ್ಟ ಗುರಿಯಿಲ್ಲದೆ ಕಲಾಕೃತಿ ರಚಿಸಲು ಅವರಿಗೆ ಅವಕಾಶ ಮಾಡಿಕೊಟ್ಟಾಗ ಅದು ಮಕ್ಕಳ ಸೃಜನಶೀಲತೆಗೆ ದಾರಿ ಮಾಡಿಕೊಡುತ್ತದೆ. ಈ ಪ್ರಕ್ರಿಯೆಯಲ್ಲಿ ಮಕ್ಕಳು ಬಣ್ಣ, ರಚನೆ ಮತ್ತು ವಿನ್ಯಾಸಗಳ ಕುರಿತು ಯಾವುದೇ ನಿರ್ಬಂಧಗಳಿಲ್ಲದೇ ಅತ್ಯದ್ಭುತವಾದ ಕಲಾಕೃತಿಗಳನ್ನು ರಚಿಸಲು ಕಲಿಯುತ್ತಾರೆ! ಈ ಕೃತಿಗಳು ಕ್ಷಣಿಕವಾದದ್ದರಿಂದ ಯಾವುದೇ ಬಾಧಕವಿಲ್ಲದೇ ಮಣ್ಣಲ್ಲಿ ಮಣ್ಣಾಗಿ ಹೋಗುತ್ತವೆ. ಹೊಸ ದೃಷ್ಟಿಕೋನದಿಂದ ಪ್ರಕೃತಿಯನ್ನು ನೋಡುವ ಮಕ್ಕಳು ತಮ್ಮೊಂದಿಗೆ ಅಪಾರ ಅನುಭವವನ್ನು ಕೊಂಡೊಯ್ಯುತ್ತಾರೆ. ಪ್ರಾಕೃತಿಕ ಜಗತ್ತಿನೊಡನೆ ಮಕ್ಕಳು ಸಂಬಂಧವನ್ನು ಗಳಿಸಿಕೊಳ್ಳಲು ಮತ್ತು ಹೆಚ್ಚಿಸಿಕೊಳ್ಳುವಂತೆ ಪ್ರೋತ್ಸಾಹಿಸಲು ಇದೊಂದು ಸಂತೋಷದಾಯಕವಾದ ಮಾರ್ಗ.

ಮಕ್ಕಳನ್ನು ಪ್ರಕೃತಿಯಲ್ಲಿ ಅವರ ಪಾಡಿಗೆ ಬಿಟ್ಟು, ತಮಗೆ ಇಷ್ಟ ಬಂದವುಗಳನ್ನು ನೋಡುತ್ತಾ, ತಮಗಿಷ್ಟವಾದ ರೀತಿಯಲ್ಲಿ ಅವುಗಳನ್ನು ಚಿತ್ರಿಸಲು ಹೇಳಿದಾಗ ಮೂಡುವ ಪರಿಸರ ಪ್ರೇರಿತ ಚಿತ್ರಕಲೆಯು ಮಕ್ಕಳು ಮಾನಸಿಕ ಕಟ್ಟುಪಾಡುಗಳಿಂದ ಹೊರಬರಲು ಸಹಾಯ ಮಾಡುತ್ತದೆ. ಇಲ್ಲಿ ಮಕ್ಕಳು ಚಿತ್ರಕಲೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಪಡೆದ ಅನುಭವವು ಮುಖ್ಯವಾಗುತ್ತದೆಯೇ ಹೊರತು ಕಲೆಯು ಹೇಗೆ ಮೂಡಿ ಬಂದಿದೆ ಎನ್ನುವುದಲ್ಲ.

## ಪರಿಸರ ಜಾಗೃತಿ

ಅವರವರ ಹಳ್ಳಿ, ಪಟ್ಟಣ ಮತ್ತು ನಗರಗಳ ಪರಿಸರಕ್ಕೆ ಸಂಬಂಧಪಟ್ಟ ಸಮಸ್ಯೆಗಳು ಹಾಗು ಪರಿಸರ ಜಾಗೃತಿಯನ್ನು ಉಂಟು ಮಾಡಲು ಕಲೆಯನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳಬಹುದು.

ಸ್ಥಳೀಯ ಪರಿಸರವನ್ನು ರೂಪಿಸುವಲ್ಲಿ ವಿದ್ಯಾರ್ಥಿಗಳ ಪಾತ್ರವನ್ನು ಮನದಟ್ಟು ಮಾಡಿಕೊಡಲು ಕಲಾ ಕೇಂದ್ರಿತ ಚಟುವಟಿಕೆಗಳು ಸಹಾಯ ಮಾಡುತ್ತವೆ. ಉದಾಹರಣೆಗೆ, ನಾನೊಮ್ಮೆ ಹಕ್ಕಿ ಗೂಡುಗಳನ್ನು ತೆಗೆದು, ಘಾಸಿಗೊಳಿಸುವ ಅಭ್ಯಾಸವುಳ್ಳ ಹಳ್ಳಿಯ ವಿದ್ಯಾರ್ಥಿಗಳಿಗೆ ಗೂಡುಗಳನ್ನು ತಮ್ಮ ಕೈಯಾರೆ



**ಚಿತ್ರ 4. ಬುಡಕಟ್ಟು ಶಾಲೆಯ ಮಾಧ್ಯಮಿಕ ಶಾಲಾ ಮಕ್ಕಳ ಗುಂಪು ರಚಿಸಿದ ಪ್ರಕೃತಿ–ಪ್ರೇರೇಪಿತ ಕಲಾಕೃತಿ.**
Credits: Abhisheka K. License: CC-BY-NC.



**ಚಿತ್ರ 6. ಕಾಲಿಮ್‌ಪೊಂಗ್‌ನ ರೆಲ್ಲಿ ಹಳ್ಳಿಯಲ್ಲಿ ಬಳಸಿ ಬಿಸಾಡಿದ ರಟ್ಟಿನ ಪೆಟ್ಟಿಗೆಗಳನ್ನು ಪುನರ್‌ಸೃಷ್ಟಿಗೆ ಬಳಸುತ್ತಿರುವುದು.**
Credits: Abhisheka K. License: CC-BY-NC.

ರಚಿಸುವಂತೆ ಹೇಳಿದೆ. ಗೂಡನ್ನು ರಚಿಸಲು ಪಕ್ಷಿಗಳು ಯಾವ ಎಲೆ ಮತ್ತು ಹುಲ್ಲುಗಳನ್ನು ಬಳಸುತ್ತವೆಯೋ ಅಂತಹ ಸಾಮಗ್ರಿಗಳನ್ನೇ ಸಂಗ್ರಹಿಸುವಂತೆ ನಿರ್ದೇಶಿಸಲಾಯಿತು. ನಂತರ, ಈ ವಸ್ತುಗಳನ್ನು ಉಪಯೋಗಿಸಿಕೊಂಡು ತಮಗೆ ತೋಚಿದ ವಿಧಾನದಲ್ಲಿ ಮೊಟ್ಟೆ ಹಿಡಿಯಬಲ್ಲಂತಹ ಸಾಮರ್ಥ್ಯದ ಗೂಡುಗಳನ್ನು ರಚಿಸುವಂತೆ ಹೇಳಲಾಯಿತು. ಹಲವಾರು ತಾಸುಗಳ ತನಕ ಈ ಚಟುವಟಿಕೆಯಲ್ಲಿ ತೊಡಗಿಸಿಕೊಂಡ ನಂತರ ಕೆಲವು ಮಕ್ಕಳು ಮೇಲೆ ಹೇಳಿದಂತೆ ಧೃಡವಾದ ಗೂಡುಗಳನ್ನು ನಿರ್ಮಿಸುವಲ್ಲಿ ಸಫಲರಾದರು. ಆದರೆ, ಹಲವರು ನಿರ್ಮಿಸಿದ ಗೂಡುಗಳು ದುರ್ಬಲವಾಗಿದ್ದವು. ಈ ಸರಳ ಚಟುವಟಿಕೆಯಿಂದ ತಾವು ಕ್ಷಣ ಮಾತ್ರದಲ್ಲಿ ನಾಶ ಮಾಡುತ್ತಿದ್ದ ಗೂಡುಗಳನ್ನು ನಿರ್ಮಿಸುವಲ್ಲಿ ಪಕ್ಷಿ ಪಡುವ ಅಪಾರ ಶ್ರಮ ಹಾಗು ಸಮಯದ ಅರಿವು ಮಕ್ಕಳಿಗಾಯಿತು. ಈ ಚಟುವಟಿಕೆಯ ನಂತರ ತಾವು ಕಷ್ಟಪಟ್ಟು ನಿರ್ಮಿಸಿದ ಗೂಡುಗಳನ್ನು ನಾಶಪಡಿಸಲಾಗುವುದು ಎಂದು ವಿದ್ಯಾರ್ಥಿಗಳಿಗೆ ತಿಳಿಸಿದಾಗ ಅವರು ಗಾಬರಿಗೊಂಡು, ತಾವಿನ್ನೆಂದೂ ಹಕ್ಕಿಗೂಡುಗಳನ್ನು ನಾಶಮಾಡುವುದಿಲ್ಲವೆಂದು ಪ್ರಮಾಣ ಮಾಡಿದರು!

ತ್ಯಾಜ್ಯ ನಿರ್ವಹಣೆಯೆಂಬ ಇನ್ನೊಂದು ಬಹುಮುಖ್ಯವಾದ ಸಮಸ್ಯೆಯ ಕುರಿತು ವಿದ್ಯಾರ್ಥಿಗಳನ್ನು ಸಣ್ಣ ಪ್ರಾಯದಲ್ಲಿಯೇ ಆದಷ್ಟು ಬೇಗ ಜಾಗೃತಗೊಳಿಸಬೇಕಿದೆ. ಈ ನಿಟ್ಟಿನಲ್ಲಿ ಕಲೆಯನ್ನು ಬೇರೊಂದು ತರಹ ಬಳಸಿಕೊಳ್ಳಲಾಯಿತು. ಇಂತಹ ಕಾರ್ಯಾಗಾರದ ಆರಂಭವು ತ್ಯಾಜ್ಯ ನಿರ್ವಹಣೆ, ತ್ಯಾಜ್ಯವನ್ನು ಕಡಿಮೆ ಮಾಡುವುದು ಮತ್ತು ಮರುಬಳಕೆ ಮಾಡುವುದನ್ನು ಕುರಿತು ಚರ್ಚಿಸಿ ನಂತರ ಗೊಬ್ಬರಗುಂಡಿಗಳನ್ನು ನಿರ್ಮಿಸುವುದರ ಮುಖಾಂತರ ಆಗುತ್ತಿತ್ತು; ಶಿಬಿರ ಮುಂದುವರೆದಂತೆ ಕ್ರಮೇಣ ಕಸದಿಂದ ಉಪಯುಕ್ತ ವಸ್ತುಗಳನ್ನು ರಚಿಸುವುದರತ್ತ ಸಾಗುತ್ತಿತ್ತು. ನಂತರ ಮಕ್ಕಳಿಗೆ ತಮ್ಮ ಮನೆಯಲ್ಲಿ ಬಳಸಿ ಬಿಸಾಡಿದ್ದಿರಬಹುದಾದ ವಸ್ತುಗಳಿಂದ ಬಹುಪಯೋಗಿ ಸಾಮಗ್ರಿಗಳನ್ನು ರಚಿಸುವಂತೆ ತಿಳಿಸಲಾಯಿತು. ಈ ಚಟುವಟಿಕೆಗಳಲ್ಲಿ ಕಸದಿಂದ ನಿರ್ಮಿಸಲಾಗುವ ಅತ್ಯಾಕರ್ಷಕ ವಸ್ತುಗಳು ಮನಸೆಳೆಯುವುದರಿಂದ, ಯಾವುದೇ ವಸ್ತುವನ್ನು ಬಳಸಿದ ಬಳಿಕ ಬಿಸಾಡುವುದಕ್ಕೂ ಮುನ್ನ ಸಾಕಷ್ಟು ಯೋಚಿಸುವಂತೆ ಮಾಡುವಲ್ಲಿ ಸಹಾಯ ಮಾಡುತ್ತವೆ!

## ಉಪಸಂಹಾರ

ಭಾರತೀಯ ಸಂಸ್ಕೃತಿಯಲ್ಲಿ ಹಲ ವಿಧದ ಕಲಾ ಪ್ರಕಾರಗಳು – ಸಾಹಿತ್ಯ, ಕಾವ್ಯ ಮತ್ತು ಸಂಗೀತ, ನೃತ್ಯ, ಮೂರ್ತಿ ರಚನೆ, ನಾಟಕ – ಅಡಕಗೊಂಡಿವೆ. ಪ್ರಕೃತಿಯನ್ನು ಅರಿಯುವುದರ ಜೊತೆಗೆ ಅದರೊಡನೆ ಬಾಂಧವ್ಯವನ್ನು ಬೆಳೆಸಲು ಆ ಬಗೆಬಗೆಯ ಕಲಾ ಪ್ರಕಾರಗಳನ್ನು ಬಳಸಿಕೊಳ್ಳಬಹುದು. ಪರಿಸರ ಸಂರಕ್ಷಣೆ ಕುರಿತಾದ ರಂಗಭೂಮಿ ಚಟುವಟಿಕೆಗಳಲ್ಲಿ ಮಕ್ಕಳು ಸಣ್ಣ-ಪುಟ್ಟ ಪಾತ್ರಗಳಲ್ಲಿ ತೊಡಗಿಸಿಕೊಳ್ಳುವುದರಿಂದ ಮಕ್ಕಳಲ್ಲಿ ಮಾತ್ರವಲ್ಲದೇ ವಯಸ್ಕ ಹಾಗು ಪ್ರೇಕ್ಷಕರಲ್ಲಿಯೂ ಈ ಕುರಿತಾದ ಜಾಗೃತಿ ಮೂಡುತ್ತದೆ. ಮುಖ್ಯವಾಹಿನಿಯಿಂದ ದೂರವಿರುವ, ಅವಗಣನೆಗೊಳಗಾದ ಮತ್ತು ಹಿಂದುಳಿದ ಸಮುದಾಯಗಳನ್ನು ತಲುಪಲೂ ಕಲಾ ಮಾಧ್ಯಮವು ಇನ್ನಿತರೆ ಮಾರ್ಗಗಳಿಗಿಂತ ಹೆಚ್ಚು ಸಹಾಯಕಾರಿ.

ಪರಿಸರವನ್ನು ಕಲೆಯ ರೂಪದಲ್ಲಿ ಕಲಿಸಲು ಶಿಕ್ಷಕರಾದ ನಾವು ನಿಸರ್ಗದ

ಕುರಿತ ಸೂಕ್ಷ್ಮತೆ, ವಿನೋದಶೀಲತೆ ಮತ್ತು ಸೃಜನಶೀಲತೆಯನ್ನು ಬೆಳೆಸಿಕೊಳ್ಳಬೇಕಾಗಿದೆ. ಪ್ರಕೃತಿಯ ವಿಷಯಗಳನ್ನು ಯಾವ ರೀತಿಯಲ್ಲಿ ಸಂತೋಷದಾಯಕವಾಗಿ ಕಲಿಯಬಹುದು ಹಾಗು ಕಲಿಸಬಹುದೆಂದು ತೋರಿಸಿಕೊಡಲು ಕೆಲವೇ ಕೆಲವು ಉದಾಹರಣೆಗಳನ್ನು ಮಾತ್ರ ಈ ಲೇಖನದಲ್ಲಿ ಚರ್ಚಿಸಲಾಗಿದೆ. ಕಲೆಯನ್ನು ತಮ್ಮ ತರಗತಿಗಳಲ್ಲಿ ಕ್ರಿಯಾತ್ಮಕವಾಗಿ ಮತ್ತು ಹೆಚ್ಚು ಹೆಚ್ಚು ಬಳಸಿಕೊಳ್ಳಲು ಈ ಲೇಖನವು ತಮ್ಮನ್ನು ಪ್ರಚೋದಿಸುತ್ತದೆ ಎಂದು ನಂಬಿದ್ದೇನೆ.





**ಚಿತ್ರ 7. ಬಳಸಿ ಬಿಸಾಡಿದ ನೀರು ಮತ್ತು ಶಾಂಪೂ ಬಾಟಲಿಗಳಿಂದ ತಯಾರಿಸಿದ ಭರಣಿಗಳು**. ಮನುಷ್ಯರು ಕೆಟ್ಟದ್ದೆಂದು ಭಾವಿಸುವ ಅಥವಾ ಅಪಶಕುನವೆಂದು ತಿಳಿಯುವ ಜೀವಿಗಳ ಚಿತ್ರಗಳನ್ನು ಬಿಡಿಸಿ ಭರಣಿಗಳನ್ನು ಅಲಂಕರಿಸಲಾಯಿತು.
Credits: Abhisheka K. License: CC-BY-NC.



**ಅಭಿಷೇಕ ಕೃಷ್ಣಗೋಪಾಲ** ಇವರು ಪರಿಸರವಾದಿ, ಪರಿಸರ ಶಿಕ್ಷಣತಜ್ಞೆ ಹಾಗು ಕಲಾವಿದೆ (ಚಿತ್ರಕಲೆ ಮತ್ತು ರಂಗಭೂಮಿ). ಪ್ರಕೃತಿಯ ಸಂರಕ್ಷಣೆಯ ಜಾಗೃತಿಗಾಗಿ ಇವರು ಪರಿಸರ ಕ್ಷೇತ್ರದಲ್ಲಿ ಪಡೆದ ಅಪಾರ ಅನುಭವ ಮತ್ತು ಕಲಾ ಮಾಧ್ಯಮವನ್ನು ಬಳಸಿಕೊಳ್ಳುತ್ತಾರೆ. ನಗರ ಪ್ರದೇಶಗಳಲ್ಲಿ ಗಾಯಗೊಂಡ ಮತ್ತು ಅನಾಥವಾಗಿರುವ ಹಲವಾರು ವನ್ಯಮೃಗಗಳಿಗೆ ಸೂಕ್ತ ವಾಸಸ್ಥಾನವನ್ನು ಒದಗಿಸುವಲ್ಲಿ ಹಲವಾರು ವರ್ಷಗಳ ಅನುಭವವನ್ನು ಹೊಂದಿದ್ದಾರೆ. ಅಭಿಷೇಕಾ ಅವರನ್ನು ಈ ಮಿಂಚಂಚೆಯಲ್ಲಿ ಸಂಪರ್ಕಿಸಬಹುದು: abhishekagopal@gmail.com.

**ಅನುವಾದ**: ಮನೋಜ್ ಗೋಡ್ಬೋಲೆ **ಪರಿಶೀಲನೆ**: ಸ್ಮಿತಾ